

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 791
ಸದಸ್ಯರ ಹೆಸರು : ಶ್ರೀ ವಿಜಯ ಸಿಂಗ್
ಉತ್ತರಿಸುವ ದಿನಾಂಕ : 11/03/2020
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೀದರ್ ಜಿಲ್ಲೆಯ ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ವಿದ್ಯಾರ್ಥಿ ನಿಲಯಗಳಲ್ಲಿ ವ್ಯಾಸಂಗ ಮಾಡುತ್ತಿರುವ ಮಕ್ಕಳು ಮೂಲಭೂತ ಸೌಲಭ್ಯಗಳಿಲ್ಲದೆ (ಸ್ನಾನ ಗೃಹ, ಶೌಚಾಲಯಗಳ ಕೊರತೆ) ತೀವ್ರವಾದ ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು.<br><br>**ಬೀದರ್ ಜಿಲ್ಲೆಯಲ್ಲಿ ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ನಡೆಸಲಾಗುತ್ತಿರುವ ವಿದ್ಯಾರ್ಥಿ ನಿಲಯಗಳ ಪೈಕಿ ಮಂಜೂರಾತಿ ಸಂಖ್ಯೆಗಿಂತ** ಹೆಚ್ಚಿನ ದಾಖಲಾತಿ ಸಂಖ್ಯೆ ಹೊಂದಿರುವ 06 ವಿದ್ಯಾರ್ಥಿ ನಿಲಯಗಳಲ್ಲಿ ಶೌಚಾಲಯ ಮತ್ತು ಸ್ನಾನಗೃಹ ಕೊಠಡಿಗಳ ಕೊರತೆಯಿರುತ್ತದೆ.<br><br>ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖಾ ವತಿಯಿಂದ 4 ಮೆಟ್ರಿಕ್ ಪೂರ್ವ ಹಾಗೂ 4 ಮೆಟ್ರಿಕ್ ನಂತರದ ಒಟ್ಟು 8 ವಿದ್ಯಾರ್ಥಿನಿಲಯಗಳು **ಕಾರ್ಯನಿರ್ವಹಿಸುತ್ತಿವೆ. ಸದರಿ ವಿದ್ಯಾರ್ಥಿನಿಯಗಳಲ್ಲಿ** ಅಗತ್ಯಕ್ಕನುಗುಣವಾಗಿ ಸ್ನಾನದ ಗೃಹ **ಶೌಚಾಲಯಗಳು** ಲಭ್ಯವಿರುತ್ತವೆ. ಮುಂದುವರೆದು 8 ವಿದ್ಯಾರ್ಥಿನಿಲಯಗಳ ಪೈಕಿ 3 ವಿದ್ಯಾರ್ಥಿನಿಲಯಗಳು ಸ್ವಂತ ಕಟ್ಟಡದಲ್ಲಿ ನಡೆಯುತ್ತಿವೆ. 4 ವಿದ್ಯಾರ್ಥಿನಿಲಯಗಳಿಗೆ ರೂ.13.36 ಕೋಟಿಗಳ ವೆಚ್ಚದಲ್ಲಿ ಸ್ವಂತ ಕಟ್ಟಡ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. ಉಳಿದ 1 ವಿದ್ಯಾರ್ಥಿನಿಲಯಕ್ಕೆ ನಿವೇಶನ ಪಡೆಯಲು ಕ್ರಮವಹಿಸಲಾಗುತ್ತಿದ್ದು, ನಿವೇಶನ ದೊರೆತ ನಂತರ ಸ್ವಂತ ಕಟ್ಟಡ ನಿರ್ಮಾಣ ಮಾಡಲು ಕ್ರಮವಹಿಸಲಾಗುವುದು. |

| | | |
|---|---|---|
| ಆ | ಬಂದಿದ್ದಲ್ಲಿ, ವಿದ್ಯಾರ್ಥಿ ನಿಲಯಗಳಲ್ಲಿರುವ ಮಕ್ಕಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | |
| ಇ | **ಬೀದರ್ ಜಿಲ್ಲೆಯ ಎಷ್ಟು ವಿದ್ಯಾರ್ಥಿ ನಿಲಯಗಳು ಮೂಲಭೂತ** ಸೌಕರ್ಯಗಳಂದ ವಂಚಿತವಾಗಿವೆ; ಸರ್ಕಾರದಿಂದ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ಎಷ್ಟು ಅನುದಾನ ಒದಗಿಸಲಾಗಿದೆ; ಅನುದಾನ ಸಮರ್ಪಕವಾಗಿ ಬಳಕೆ ಮಾಡದಿರಲು ಕಾರಣವೇನು? **(ತಾಲ್ಲೂಕುವಾರು ವಿವರ ಒದಗಿಸುವುದು)** | |

**2019-20ನೇ ಸಾಲಿನಲ್ಲಿ ಬೀದರ್ ಜಿಲ್ಲೆಯಲ್ಲಿ ಸಮಾಜ ಕಲ್ಯಾಣ** ಇಲಾಖೆಯ ವತಿಯಿಂದ ನಡೆಸಲಾಗುತ್ತಿರುವ ಸರ್ಕಾರಿ ವಿದ್ಯಾರ್ಥಿ ನಿಲಯಗಳಲ್ಲಿ **ಅಗತ್ಯವಿರುವ ಉನ್ನತೀಕರಣ ಕಾಮಗಾರಿಗಳನ್ನು ಕೈಗೊಳ್ಳಲು ದಿ:07-09-2019 ರಲ್ಲಿ ರೂ.201.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಆದರೆ, ಅನುದಾನ** ಬಿಡುಗಡೆ ಮಾಡಿ ಸುಮಾರು 05 ತಿಂಗಳು ಕಳೆದರೂ ಸಹಾ ಸದರಿ ಅನುದಾನವನ್ನು ವೆಚ್ಚ ಮಾಡಲು ಕ್ರಮ ವಹಿಸದಿರುವುದರಿಂದ, ದಿ:23-01-2020 **ರಲ್ಲಿ ರೂ.201.00 ಲಕ್ಷಗಳನ್ನು ಹಿಂಪಡೆಯಲಾಗಿದೆ.**

ಮುಂದುವರೆದು, ಮಂಜೂರಾತಿ ಸಂಖ್ಯೆಗಿಂತ ಹೆಚ್ಚಿನ ದಾಖಲಾತಿ ಸಂಖ್ಯೆ ಹೊಂದಿರುವ 06 ವಿದ್ಯಾರ್ಥಿ ನಿಲಯಗಳಲ್ಲಿ ಶೌಚಾಲಯ ಮತ್ತು ಸ್ನಾನಗೃಹ ಕೊಠಡಿಗಳನ್ನು ನಿರ್ಮಾಣ ಮಾಡಲು ಸರ್ಕಾರಿ ನಿರ್ಮಾಣ ಏಜೆನ್ಸಿ ವತಿಯಿಂದ ಅಂದಾಜು ಪಟ್ಟಿಗಳನ್ನು ಸಿದ್ಧಪಡಿಸಿ ದಿ:10-01-2020 ರಂದು ಉಪ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ಬೀದರ್ ಜಿಲ್ಲೆ ರವರಿಗೆ ನಿರ್ದೇಶನ ನೀಡಲಾಗಿರುತ್ತದೆ. ವಿದ್ಯಾರ್ಥಿ ನಿಲಯಗಳ ವಿವರಗಳು ಈ ಕೆಳಕಂಡಂತಿರುತ್ತದೆ.

| ಕ್ರ. ಸಂ | **ತಾಲ್ಲೂಕು** | **ವಿದ್ಯಾರ್ಥಿ ನಿಲಯಗಳ ವಿವರ** |
|---|---|---|
| 1 | ಬೀದರ್ | **ಸರ್ಕಾರಿ ಪ್ರಥಮ ದರ್ಜೆ ಕಾಲೇಜು ವಿದ್ಯಾರ್ಥಿ ನಿಲಯ, ನೌಬಾದ್,** |
| 2 | ಬೀದರ್ | ಸರ್ಕಾರಿ ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿ ನಿಲಯ, ಚಿಟಗುಪ್ಪ-1, |
| 3 | ಬೀದರ್ | **ಸರ್ಕಾರಿ ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿ** ನಿಲಯ, ನೌಬಾದ್ (ಹೊಸ) |
| 4 | ಬೀದರ್ | ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಪ್ರತಾಪನಗರ, |
| 5 | ಬೀದರ್ | ಸರ್ಕಾರಿ ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿ ನಿಲಯ, ಬೀದರ್ ಟೌನ್ (ಹೊಸ) |
| 6 | ಬಸವಕಲ್ಯಾಣ | ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯ, ಹುಲಸೂರು |

| | | |
|---|---|---|
| | | ಜಿಲ್ಲೆಯಿಂದ ಅಂದಾಜು ಪಟ್ಟಿಗಳನ್ನು ಪಡೆದು, ಆಡಳಿತಾತ್ಮಕ ಅನುಮೋದನೆ ನೀಡಿ ಅನುದಾನ ಬಿಡುಗಡೆ ಮಾಡಿ, ಅಗತ್ಯ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಕ್ರಮವಹಿಸಲಾಗುವುದು.<br><br>ಬೀದರ್ ಜಿಲ್ಲೆಯ ಪರಿಶಿಷ್ಟ ಪಂಗಡದ 4 ವಿದ್ಯಾರ್ಥಿನಿಲಯಗಳಿಗೆ ರೂ.13.36 ಕೋಟಿಗಳ ವೆಚ್ಚದಲ್ಲಿ ಸ್ವಂತ ಕಟ್ಟಡ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. ಉಳಿದ 1 ವಿದ್ಯಾರ್ಥಿನಿಲಯಕ್ಕೆ ನಿವೇಶನ ಪಡೆಯಲು ಕ್ರಮವಹಿಸಲಾಗುತ್ತಿದ್ದು, ನಿವೇಶನ ದೊರೆತ ನಂತರ ಮೂಲಭೂತ ಸೌಕರ್ಯವುಳ್ಳ ಸ್ವಂತ ಕಟ್ಟಡ ನಿರ್ಮಾಣ ಮಾಡಲು ಕ್ರಮವಹಿಸಲಾಗುವುದು |

ಸಕಇ 162 ಪಕವಿ 2020

(ಗೋವಿಂದ ಎಂ.ಕಾರಜೋಳ)
ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ
ಮತ್ತು ಸಮಾಜ ಕಲ್ಯಾಣ ಸಚಿವರು